# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1038

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿ ಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 10.03.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ಜಿಲ್ಲೆಯಲ್ಲಿ ಸರ್ಕಾರಿ ಗುಂಡುತೋಪು, ಗೋಮಾಳಗಳಲ್ಲಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ತಾಲ್ಲೂಕುವಾರು ಮಾಹಿತಿ ನೀಡುವುದು) | ಹೌದು.<br>ತಾಲ್ಲೂಕುವಾರು ವಿವರ ಅನುಬಂಧ-1 ರಲ್ಲಿ ನೀಡಲಾಗಿದೆ. |
| (ಆ) | ಮಂಡ್ಯ ಜಿಲ್ಲಾ ವ್ಯಾಪ್ತಿಯಲ್ಲಿರುವ ಒಟ್ಟು ಸರ್ಕಾರಿ ಗುಂಡುತೋಪುಗಳೆಷ್ಟು; ಅದರಲ್ಲಿ ಈಗಾಗಲೇ ಒತ್ತುವರಿ ಮಾಡಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವ ಗುಂಡುತೋಪು ಗಳೆಷ್ಟು; ಹಾಗಿದ್ದಲ್ಲಿ ಸರ್ಕಾರ ಅವುಗಳನ್ನು ತೆರವುಗೊಳಿಸಲು ಕೈಗೊಂಡಿರುವ ಕ್ರಮಗಳೇನು; (ತಾಲ್ಲೂಕುವಾರು ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಒಟ್ಟು 401 ಗುಂಡುತೋಪುಗಳಿರುತ್ತವೆ. ಅದರಲ್ಲಿ ಈಗಾಗಲೇ ಒತ್ತುವರಿ ಮಾಡಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವ ಗುಂಡುತೋಪುಗಳ ಸಂಖ್ಯೆ 200. ತಾಲ್ಲೂಕುವಾರು ವಿವರವನ್ನು ಅನುಬಂಧ-2ರಲ್ಲಿ ನೀಡಲಾಗಿದೆ.<br><br>ಅಕ್ರಮ-ಸಕ್ರಮದಡಿ ಜಮೀನಿನ ಮಂಜೂರಾತಿ ಕೋರಿ ಸಲ್ಲಿಕೆಯಾಗಿರುವ ಅರ್ಜಿಗಳನ್ನು ಹೊರತುಪಡಿಸಿ ಉಳಿಕೆ ಒತ್ತುವರಿಯಾಗಿರುವ ಸರ್ಕಾರಿ ಗುಂಡುತೋಪುಗಳ ಒತ್ತುವರಿ ತೆರವುಗೊಳಿಸುವ ಸಂಬಂಧ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿ ಒತ್ತುವರಿ ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ. |
| (ಇ) | ಅಕ್ರಮವಾಗಿ ಸಾಗುವಳಿ ಮಾಡುತ್ತಿರುವವರಿಗೆ ಸಕ್ರಮಗೊಳಿಸಲು ಅವಕಾಶವಿದೆಯೇ; (ಪೂರ್ಣ ವಿವರ ನೀಡುವುದು) | ಇಲ್ಲ.<br>ಗುಂಡುತೋಪು ಜಮೀನುಗಳನ್ನು ಅಕ್ರಮವಾಗಿ ಸಾಗುವಳಿ ಮಾಡುತ್ತಿರುವವರಿಗೆ ಕರ್ನಾಟಕ ಭೂಕಂದಾಯ ನಿಯಮಗಳು -1966 ರ ನಿಯಮ 108 (ಐ) ರಡಿ ಗುಂಡುತೋಪು ಜಮೀನುಗಳನ್ನು ಮಂಜೂರು ಮಾಡಲು ಅವಕಾಶವಿರುವುದಿಲ್ಲ. |
| (ಈ) | ಗುಂಡುತೋಪುಗಳಲ್ಲಿ ಮರಗಳನ್ನು ಬೆಳೆಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಗುಂಡುತೋಪು ಜಮೀನುಗಳಲ್ಲಿ ಮರಗಳನ್ನು ಬೆಳೆಸಲು ಜಮೀನನ್ನು ಹಸ್ತಾಂತರಿಸುವಂತೆ ಅರಣ್ಯ ಇಲಾಖೆಯು ಕೋರಿದಲ್ಲಿ ಅದರಂತೆ ಕ್ರಮವಹಿಸಲಾಗುವುದು. |

(ಕಂಇ 11 ಎಲ್‌ಜಿವ್ಯೆ 2021)

(ಆರ್.ಅಶೋಕ)
ಕಂದಾಯ ಸಚಿವರು

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ಅಪ್ಪಾಜಿ ಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1038ರ ಅನುಬಂಧಗಳು

### ಅನುಬಂಧ-1

| ಕ್ರ. ಸಂ. | ತಾಲ್ಲೂಕು | ಗೋಮಾಳಗಳ ಒಟ್ಟು ಸಂಖ್ಯೆ | ಗೋಮಾಳಗಳ ಒಟ್ಟು ವಿಸ್ತೀರ್ಣ (ಎ/ಗುಂ) | ಸರ್ಕಾರಿ ಗುಂಡು ತೋಪುಗಳ ಒಟ್ಟು ಸಂಖ್ಯೆ | ಸರ್ಕಾರಿ ಗುಂಡು ತೋಪುಗಳ ಒಟ್ಟು ವಿಸ್ತೀರ್ಣ | ಗೋಮಾಳ ಜಮೀನಿನಲ್ಲಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವವರ ಸಂಖ್ಯೆ ಮತ್ತು ವಿಸ್ತೀರ್ಣ | | ಗುಂಡುತೋಪು ಜಮೀನಿನಲ್ಲಿ ಅಕ್ರಮವಾಗಿ ಸಾಗುವಳಿ ಮಾಡುತ್ತಿರುವವರ ಸಂಖ್ಯೆ ಮತ್ತು ವಿಸ್ತೀರ್ಣ | |
|---|---|---|---|---|---|---|---|---|---|
| | | | | | | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ |
| 1 | ಮಂಡ್ಯ | 274 | 10795-17 | 37 | 57-10 | 3157 | 4630-12 | 27 | 31-17 |
| 2 | ಮದ್ದೂರು | 796 | 11271-24 | 19 | 45.23 | 4575 | 463-10 | 52 | 13-17 |
| 3 | ಮಳವಳ್ಳಿ | 233 | 8971-03 | 70 | 94.16 | 8760 | 18214-30 | 63 | 41-24 |
| 4 | ಶ್ರೀರಂಗಪಟ್ಟಣ | 58 | 4532-15 | 27 | 216.00 | 2363 | 3195-03 | 00 | 00-00 |
| 5 | ಪಾಂಡವಪುರ | 217 | 9067-00 | 40 | 57.15 | 4160 | 7803-15 | 30 | 26-00 |
| 6 | ಕೆ.ಆರ್. ಪೇಟೆ | 313 | 23420-31 | 109 | 642.22 | 12072 | 23420-00 | 00 | 00-00 |
| 7 | ನಾಗಮಂಗಲ | 255 | 29230-08 | 99 | 100.37 | 14925 | 33552-10 | 63 | 95-18 |

### ಅನುಬಂಧ-2

| ಕ್ರ.ಸಂ | ತಾಲ್ಲೂಕು | ಸರ್ಕಾರಿ ಗುಂಡುತೋಪುಗಳ ಸಂಖ್ಯೆ | ಅಕ್ರಮವಾಗಿ ಒತ್ತುವರಿ ಮಾಡಿ ಸಾಗುವಳಿ ಮಾಡುತ್ತಿರುವ ಗುಂಡು ತೋಪುಗಳ ಸಂಖ್ಯೆ |
|---|---|---|---|
| 1 | ಮಂಡ್ಯ | 37 | 27 |
| 2 | ಮದ್ದೂರು | 19 | 17 |
| 3 | ಮಳವಳ್ಳಿ | 70 | 63 |
| 4 | ಶ್ರೀರಂಗಪಟ್ಟಣ | 27 | 00 |
| 5 | ಪಾಂಡವಪುರ | 40 | 30 |
| 6 | ಕೆ.ಆರ್. ಪೇಟೆ | 109 | 00 |
| 7 | ನಾಗಮಂಗಲ | 99 | 63 |